



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 39

ಸಂಪುಟ: ೦೫ ಸಂಚಿಕೆ: ೧ Vol. 05 Issue 1 | ಏಪ್ರಿಲ್ ೨೦೧೮ April 2018 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

# ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ
# ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಕ ಪ್ರಶಸ್ತಿ

**೨೩–೨–೨೦೧೮ ಪ್ರಶಸ್ತಿ ಪ್ರದಾನ ಸಮಾರಂಭ**

೧.ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ : ನಗದು ಪ್ರಶಸ್ತಿ ರೂ. ೧೦,೦೦೦/–ಪ್ರಶಸ್ತಿ ಪುರಸ್ಕೃತರು ಶ್ರೀ ಜಿ.ಎನ್. ರಂಗನಾಥ ರಾವ್, ಹಿರಿಯ ಪತ್ರಕರ್ತರು

೨.ಪ್ರೊ.ಎಲ್.ಎಸ್. ಶೇಷಗಿರಿರಾವ್, ವಿಮರ್ಶಕ ಪ್ರಶಸ್ತಿ : ನಗದು ಪ್ರಶಸ್ತಿ ರೂ. ೧೦,೦೦೦/– ಪ್ರಶಸ್ತಿ ಪುರಸ್ಕೃತರು ಡಾ॥ ಎಚ್.ಎಸ್. ರಾಘವೇಂದ್ರರಾವ್, ಖ್ಯಾತ ವಿಮರ್ಶಕರು.

ಸಮಾರಂಭದ ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ ಡಾ.ಸಿ.ಎನ್. ರಾಮಚಂದ್ರನ್, ಖ್ಯಾತ ವಿಮರ್ಶಕರು, ಸಾಹಿತಿಗಳು ಮತ್ತು ಅನುವಾದಕರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ.ಪಿ.ವಿ. ನಾರಾಯಣ ಅವರು ದತ್ತಿದಾನಿಗಳ ಪರಿಚಯ ಮತ್ತು ದತ್ತಿಯ ಆಶಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿ, ಪ್ರಶಸ್ತಿ ವಿಜೇತರಿಗೂ, ಪ್ರಶಸ್ತಿಗಳ ಆಯ್ಕೆ ಸಮಿತಿಯ ಸದಸ್ಯರಿಗೂ, ಮಾಧ್ಯಮ ಪ್ರತಿನಿಧಿಗಳಿಗೂ ಮತ್ತು ಸಮಾರಂಭದ ಅಧ್ಯಕ್ಷತೆವಹಿಸಿದ ಡಾ.ಸಿ.ಎನ್. ರಾಮಚಂದ್ರನ್ ಅವರಿಗೂ ಸ್ವಾಗತ ಕೋರಿದರು.

ಪ್ರಶಸ್ತಿ ವಿಜೇತರುಗಳಿಗೆ ಪ್ರಶಸ್ತಿ ಫಲಕ ಗೌರವ ಸಮರ್ಪಣೆ ಮತ್ತು ಪ್ರಶಸ್ತಿಯ ಮೊತ್ತವನ್ನು ಚೆಕ್ ಮೂಲಕ ನೀಡಿ ಗೌರವಿಸಲಾಯಿತು. ಡಾ.ವಿಜಯಾಸುಬ್ಬರಾಜ್, ಪ್ರಶಸ್ತಿ ಪುರಸ್ಕೃತರ ಅಭಿನಂದನಾ ಪತ್ರಗಳನ್ನು ವಾಚನ ಮಾಡಿದರು.

ಡಾ.ಸಿ.ಎನ್. ರಾಮಚಂದ್ರನ್ ಅವರು ಎರಡೂ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯರಿಗೆ ತಮ್ಮ ವಂದನೆಗಳನ್ನು ತಿಳಿಸಿ ಈ ಇಬ್ಬರು ಪ್ರಶಸ್ತಿ ಪುರಸ್ಕೃತರಿಗೆ ನೀಡಿದ ಗೌರವವು, ಸಮಸ್ತ ಕನ್ನಡ ಸಾಹಿತ್ಯಪ್ರಿಯರಿಗೂ ಸಂದ ಗೌರವವೆಂದು ತಿಳಿಸಿದರು. ಶ್ರೀ ಜಿ.ಎನ್. ರಂಗನಾಥ್ ಅವರು ನಿಷ್ಣಾತ ಮತ್ತು ಸಮರ್ಥ ಪ್ರತಿಕೋದ್ಯಮಿ ಅಷ್ಟೇ ಅಲ್ಲ, ಅವರೊಬ್ಬ ಸಮರ್ಥ ಭಾಷಾಂತಕಾರರೂ ಸಹ ಎಂದು ಹೇಳಿ ಅವರ ಕೆಲವು ಅನುವಾದಿತ ಕೃತಿಗಳನ್ನು ನೆನಪಿಸಿಕೊಂಡರು. ಡಾ. ಎಚ್.ಎಸ್. ರಾಘವೇಂದ್ರರಾವ್ ಅವರೊಂದಿಗಿನ ತಮ್ಮ ಒಡನಾಟ, ವೃತ್ತಿಯಲ್ಲಿನ ಅವರ ತಾತ್ವಿಕ ಬದ್ಧತೆ ಮತ್ತು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿನ ಅವರ ಅನುಭವವೇ, ಅವರನ್ನು ಈ ತಲೆಮಾರಿನ ಶ್ರೇಷ್ಠ ವಿಮರ್ಶಕರಾಗಿ ಹೊರಹೊಮ್ಮಲು ಕಾರಣ ಎಂದು ತಿಳಿಸಿದರು.



ಶ್ರೀ ಬಿ.ಎಸ್. ಗುರುಪ್ರಸಾದ್, ಸಂಯೋಜನಾಧಿಕಾರಿಗಳು ವಂದನಾರ್ಪಣೆ ಸಲ್ಲಿಸಿದರು.

## ಸಂಪಾದಕೀಯ

ಚುನಾವಣೆಗಳು ಸಮೀಪಿಸುತ್ತಿವೆ. ರಾಜಕೀಯ ನಾಯಕರುಗಳು ಲಂಗುಲಗಾಮಿಲ್ಲದೆ ಬಡಾಯಿ ಕೊಚ್ಚಿಕೊಳ್ಳುವುದರ ಜೊತೆಗೆ ಎದುರಾಳಿ ನಾಯಕರುಗಳ ಬಗ್ಗೆ ಹೀನಾಯವಾಗಿ ಮಾತನಾಡುವ ಪರಿಪಾಠವನ್ನೂ ಬೆಳೆಸಿಕೊಳ್ಳುತ್ತಿದ್ದಾರೆ.ಅಧಿಕಾರ ದಾಹವೆ ಪ್ರಧಾನ ಗುರಿಯಾಗಿರುತ್ತದೆ.ಇಂತಹ ನಾಯಕರು ಅಧಿಕಾರ ಪಡೆದ ನಂತರ ಅದನ್ನು ಹೇಗೆ ದುರುಪಯೋಗಪಡಿಸಿಕೊಳ್ಳಬಹುದೆಂಬ ಆತಂಕ ಮೂಡುತ್ತಿದೆ.ಈ ನಾಯಕರ ರಂಪಾಟಗಳು, ಕೆಳದರ್ಜೆ ಮಾತುಗಳು ಜನಸಾಮಾನ್ಯರನ್ನು ಕಂಗೆಡಿಸುತ್ತಿವೆ. ಆ ಬಗ್ಗೆ ಯೋಚಿಸಲೂ ಯಾರಿಗೂ ವ್ಯವಧಾನವೇ ಇಲ್ಲ.ಸಾಮಾನ್ಯ ಮತದಾರನಿಗೆ ಇರುವ ಆಯ್ಕೆಗಳು ಸೀಮಿತವಾಗಿರುವುದರಿಂದ ಹತಾಶೆಯ ಮಟ್ಟ ಹೆಚ್ಚುತ್ತಲಿದೆ.

ಒಂದು ವರದಿಯ ಪ್ರಕಾರ ಹಿಂದಿನ ಚುನಾವಣೆಗಳಲ್ಲಿ ನೋಟಾ(**NOTA**)ಗೆ 1.33 ಕೋಟಿ ಮತಗಳು ಬಿದ್ದಿರುತ್ತವೆ. ಬರಲಿರುವ ಚುನಾವಣೆಗಳಲ್ಲಿ ಈ ಸಂಖ್ಯೆ ಹೆಚ್ಚಾಗುವುದರಲ್ಲಿ ಸಂಶಯವೇ ಇಲ್ಲ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

## ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಾಂತರಸ | ೦೪-೦೪-೧೯೨೫ |
| ಫರ್ಡಿನಾಂಡ್ ಕಿಟೆಲ್ | ೦೮-೦೪-೧೮೩೨ |
| ಆರ್. ನರಸಿಂಹಚಾರ್ | ೦೯-೦೪-೧೮೬೧ |
| ಆನಂದಕಂದ ಬೆಟಗೇರಿ ಕೃಷ್ಣಶರ್ಮಾ | ೧೬-೦೪-೧೯೦೦ |
| ತರಾಸು | ೨೧-೦೪-೧೯೨೦ |
| ಬೀಚಿ | ೨೩-೦೪-೧೯೧೩ |
| ಪಿಕ್ರೆನ್ | ೨೨-೦೪-೧೮೪೫ |
| ತಿರುಮಲೆ ತಾತಾಚಾರ್ಯ ಶರ್ಮಾ | ೨೬-೦೪-೧೮೯೫ |

## ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಭಾರತಿಸುತ | ೦೪-೦೪-೧೯೭೬ |
| ತರಾಸು | ೧೦-೦೪-೧೯೦೪ |
| ಎಂ.ಎಸ್. ಪುಟ್ಟಣ್ಣ | ೧೧-೦೪-೧೯೩೦ |
| ಗಳಗನಾಥರು | ೨೨-೦೪-೧೯೪೨ |
| ವಿಕೃ ಗೋಕಾಕ್ | ೨೮-೦೪-೧೯೯೨ |

ಪ್ರತಿಕ್ರಿಯೆ
ಡಾ॥ ಎಂ.ಪ್ರಭಾಕರ ಜೋಶಿ
205, 'ಹರಿಭಕ್ತಿ', ಪಿಂಟೋ ಲೇನ್
ಕದ್ರಿ ಕಂಬಳ, ಮಂಗಳೂರು–575004
ದಿವ್ಯದೇಸಿ

ಈ ಕುರಿತು ತಮ್ಮ ವಿಚಾರಕ್ಕೆ ಪ್ರತಿಕ್ರಿಯೆ ದಿವ್–ಮೂಲತಃ ಬೆಳಕು.ಅದೇ ದೇವ, ದಿವ್ಯ, ಶುದ್ಧಿ, ಬೆಂಕಿ, ಪರೀಕ್ಷೆಗಳಿಗೆ ಮೂಲ Deus, Divine ಗಳಿಗೂ ಸಂಬಂಧ, ದೇಶೀ/ದೇಸಿ ಎಂಬುದನ್ನು Folk ಎಂಬರ್ಥದಲ್ಲಿ ಹಲವರು ಬಳಸುತ್ತಾರೆ. ಇದು ಸರಿಯೆ?ಪ್ರಾಚೀನ ಭಾರತೀಯ ವಿಭಾಗ ಕಲ್ಪನೆಯಲ್ಲಿ Folk ಇಲ್ಲ. ದೇಶಿ–ದೇಶೀಯ ಅಂದರೆ ಆ ದೇಶಕ್ಕೆ ಹೊಂದಿ ರೂಪು ಪಡೆದ ಶಾಸ್ತ್ರೀಯವೇ.ಹಾಗಾಗಿಯೇ ಅದಕ್ಕೆ ಸುಂದರ, ಅಚ್ಚುಕಟ್ಟಾದ, ವ್ಯವಸ್ಥಿತ ಎಂಬ ಅರ್ಥ ಕನ್ನಡ ಕಾವ್ಯಗಳಲ್ಲದೆ "ಮಾರ್ಗ" ಎಂದರೆ ಬಹುಶಃ "ಹಳೇ ಶಾಸ್ತ್ರೀಯ" Lost, Extinct ಇರಬಹುದು.

## ಪ್ರಕಟಣೆಗಳು

ತಾಳೆಗರಿ/ ಓಲೆಗರಿ, ಕಾಗದದ ಮೇಲೆ ಬರೆದ ಪ್ರಾಚೀನ ಹಸ್ತಪ್ರತಿಗಳು, ಕಡತಗಳು ದೇಶದ ಅಮೂಲ್ಯವಾದ ಆಸ್ತಿ ಮತ್ತು ಸಂಪತ್ತು. ಭಾರತ ಸರ್ಕಾರವು ಅವುಗಳನ್ನು ಉಳಿಸಿಕೊಳ್ಳುವ ಮಹತ್ತರ ಕಾರ್ಯವನ್ನು ಕೈಗೊಂಡಿದೆ. (National Mission for Manuscripts, New Delhi) ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಬಿ.ಎಂ.ಶ್ರೀ.ಪ್ರತಿಷ್ಠಾನವು ಸಂರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಾ ಬರುತ್ತಿದೆ.ಇಂತಹ ಮೌಲಿಕ ದಾಖಲೆಗಳು ನಾಶವಾಗುವುದನ್ನು ತಪ್ಪಿಸಲು, ಬಿ.ಎಂ.ಶ್ರೀ ಪ್ರತಿಷ್ಠಾನವು ಸಾರ್ವಜನಿಕರು, ಮಠಮಾನ್ಯಗಳು, ಗುರುಕುಲಗಳು, ಅರಮನೆ, ಗುರುಮನೆಗಳು, ವಿದ್ಯಾಸಂಸ್ಥೆಗಳು ಹೊಂದಿರಬಹುದಾದ ತಾಳೆಗರಿ ಗ್ರಂಥಗಳ ಮತ್ತು ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಅರಿವನ್ನು ಮೂಡಿಸುತ್ತದೆ.(Preventive maintenance).ಸಂರಕ್ಷಣಾ ಸೇವೆ ಹಾಗೂ ಗ್ರಂಥಸೂಚಿ ತಯಾರಿಕೆ ಸೇವೆಗಳನ್ನೂ ನೀಡಲಾಗುವುದು. ಆಸಕ್ತರು ಈ ಸೇವೆಯ ಸದುಪಯೋಗ ಪಡೆಯಲು ಸಂಪರ್ಕಿಸಿ:

**ಶ್ರೀ ಬಿ.ಎಸ್. ಗುರುಪ್ರಸಾದ್**, ಸಂಯೋಜಕರು, ಹಸ್ತಪ್ರತಿ ವಿಭಾಗ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, 3ನೇ ಮೇನ್, ನರಸಿಂಹರಾಜ ಕಾಲೊನಿ,
ಬಸವನಗುಡಿ, ಬೆಂಗಳೂರು –560019. ಕಛೇರಿ ಸಮಯ: ಮಧ್ಯಾಹ್ನ
12–30ರಿಂದ ಸಂಜೆ 7–00ಗಂಟೆ.
ವಾರದ ರಜೆ: ಮಂಗಳವಾರ
ದೂರವಾಣಿ :080–26615877, ಮೊಬೈಲ್–9535097337

### ಪ್ರಕಟಣೆ

2017ನೇ ವರ್ಷದ ಡಾ. ವಿಜಯಾ ಸುಬ್ಬರಾಜ್ ದತ್ತಿಯ 'ಗಣ್ಯಲೇಖಕಿ ಪ್ರಶಸ್ತಿ'ಗೆ ಕತೆಗಾರ್ತಿ ಶ್ರೀಮತಿ ಎಲ್.ಸಿ. ಸುಮಿತ್ರಾ ಅವರನ್ನು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ.

2017ನೇ ವರ್ಷದ 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿಗೆ' ಡಾ॥ ಎಚ್.ಶಶಿಕಲಾ ಅವರ 'ಅರ್ಥದಾಚೆಯ ಬೆಡಗು' ಎಂಬ ಕೃತಿಯು ಆಯ್ಕೆಯಾಗಿದೆ.ಈ ಎರಡೂ ಪ್ರಶಸ್ತಿಗಳು ತಲಾ ರೂ. 10,001/–, ಸ್ಮರಣಿಕೆಗಳನ್ನು ಒಳಗೊಂಡಿರುತ್ತದೆ.

ಪ್ರಶಸ್ತಿ ಪ್ರದಾನವು ಏಪ್ರಿಲ್ 12, 2018 ನೇ ಗುರುವಾರದಂದು ಸಂಜೆ 6.00 ಗಂಟೆಗೆ ಪ್ರತಿಷ್ಠಾನದಲ್ಲಿ ನಡೆಯುವ ವಿಶೇಷ ಸಮಾರಂಭದಲ್ಲಿ ಡಾ. ಅರವಿಂದ ಮಾಲಗತ್ತಿ ಅವರಿಂದ ನೆರವೇರಲಿದೆ.

### ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ.ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

******

### ಕನ್ನಡ ಹಳಗನ್ನಡ ಡಿಪ್ಲಮೊ ತರಗತಿಗಳ ಧ್ವನಿಮುದ್ರಿಕೆಗಳು ಲಭ್ಯ

ಈಗ ನಡೆಸಲಾಗುತ್ತಿರುವ 6 ತಿಂಗಳ ಹಳಗನ್ನಡ ಡಿಪ್ಲೋಮೊ ತರಗತಿಗಳಲ್ಲಿ ವಿದ್ವಾಂಸರು ನೀಡುವ ಉಪನ್ಯಾಸಗಳ ಧ್ವನಿಮುದ್ರಿಕೆಗಳು ಈ ತರಗತಿಗಳ ವಿದ್ಯಾರ್ಥಿಗಳಿಗೆ ಲಭ್ಯಗೊಳಿಸುವ ಸೌಲಭ್ಯವನ್ನು ಪ್ರತಿಷ್ಠಾನವು ಒದಗಿಸುತ್ತಿದೆ.

# ಏಪ್ರಿಲ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**೧೨-೦೪-೨೦೧೮ ಗುರುವಾರ ಸಂಜೆ- ೬-೦೦ ಗಂಟೆಗೆ**

ಡಾ. ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ

ಮತ್ತು

ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿ ಪ್ರದಾನ ಸಮಾರಂಭ

ಡಾ. ವಿಜಯಾ ಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ : ಶ್ರೀಮತಿ ಎಲ್.ಸಿ. ಸುಮಿತ್ರಾ

ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿ : ಡಾ. ಎಚ್. ಶಶಿಕಲಾ

ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ: ಡಾ. ಅರವಿಂದ ಮಾಲಗತ್ತಿ

ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ



**೧೬-೪-೨೦೧೮ ಸೋಮವಾರ ಸಂಜೆ – ೬-೦೦ಗಂಟೆಗೆ**

ಸಂಶೋಧನ ದಿನ

ಅಧ್ಯಕ್ಷತೆ ಮತ್ತು ಪ್ರಮಾಣ ಪತ್ರ ವಿತರಣೆ : ಡಾ.ಸಿ. ನಾಗಭೂಷಣ

ಮುಖ್ಯಸ್ಥರು : ಕೋಲಾರ ಸ್ನಾತಕೋತ್ತರ ಕೇಂದ್ರ.

**೧೮-೦೪-೨೦೧೮ ಬುಧವಾರ ಸಂಜೆ -೬-೦೦**

ಸಿ.ಕೆ. ನಾಗರಾಜರಾವ್, ಕೆ.ಪಿ.ರಾವ್, ಕೊರಟಿ ಶ್ರೀನಿವಾಸರಾವ್ ದತ್ತಿ ಉಪನ್ಯಾಸ

ಉಪನ್ಯಾಸ : ಪದ್ಮರಾಜ ದಂಡಾವತೆ

ವಿಷಯ : ಮಾಧ್ಯಮ-ವರ್ತಮಾನದ ಬಿಕ್ಕಟ್ಟುಗಳು.

**೨೩-೦೪-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ**

ಸಾಕ್ಷ್ಯಚಿತ್ರ ಪ್ರದರ್ಶನ- 'ಸಾಹಿತ್ಯ ವಿಹಾರ'-೨



**೨೫-೦೪-೨೦೧೮ ಬುಧವಾರ ಸಂಜೆ ೬-೦೦ಗಂಟೆಗೆ**

"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಕುಮಾರ ವ್ಯಾಸ ಭಾರತ-ಒಂದು ಅನಿಸಿಕೆ

ಚಾಲನೆ ನೀಡುವವರು : ಡಾ. ಕೆ.ವಿ. ಶ್ರೀನಿವಾಸಮೂರ್ತಿ

### ಎಚ್.ಶಶಿಕಲಾ



ಎಚ್.ಶಶಿಕಲಾ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.ಅಲ್ಲದೆ, ಯುನೈಟೆಡ್ ಕಿಂಗ್ ಡಂನ 'ಇಂಟರ್ ನ್ಯಾಷನಲ್ ಬ್ಯಾಕಲರೇಟ್' ಸಂಸ್ಥೆಯ ಪರೀಕ್ಷಾ ಮೇಲ್ವಿಚಾರಕರಾಗಿಯೂ ಕೆಲಸ ಮಾಡುತ್ತಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದಿಂದ ಎಂ.ಫಿಲ್ ಹಾಗೂ ಪಿಎಚ್.ಡಿ.ಪದವಿಯನ್ನು, ಅಣ್ಣಾಮಲೈ ವಿಶ್ವವಿದ್ಯಾಲಯದಿಂದ ಭಾಷಾವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ.ಇವರ ಪಿಎಚ್.ಡಿ.ಪದವಿಯ ವಿಷಯ-ತೇಜಸ್ವಿಯವರ ಸಾಹಿತ್ಯದಲ್ಲಿ ಸಂಸ್ಕೃತಿಯ ಗ್ರಹಿಕೆಗಳು.ಯುಜಿಸಿಯಿಂದ ಪೋಸ್ಟ್ ಡಾಕ್ಟೋರಲ್ ಸಂಶೋಧನಾ ಪ್ರಶಸ್ತಿಯನ್ನು ಪಡೆದು, "ಹಳೆಗನ್ನಡದಲ್ಲಿನ ಭಾಷಿಕ ಪ್ರಭೇದಗಳು" ಎಂಬ ವಿಷಯ ಕುರಿತು ಸಂಶೋಧನೆಯನ್ನು ನಡೆಸಿದ್ದಾರೆ. ಅಲ್ಲದೆ, ಪದವಿ ಶಿಕ್ಷಣದಲ್ಲಿ ಭಾಷಾ ಬೋಧನೆಯ ಸ್ವರೂಪವನ್ನು ಕುರಿತಂತೆ ಯುಜಿಸಿಯ ಸಂಶೋಧನಾ ಯೋಜನೆಯ ಅಡಿಯಲ್ಲಿ ಸಂಶೋಧನೆಯನ್ನು ಮಾಡಿದ್ದಾರೆ.

ಯುನೈಟೆಡ್ ಕಿಂಗ್ ಡಂನಲ್ಲಿನ ಲಂಕಾಸ್ಟರ್ ವಿಶ್ವವಿದ್ಯಾಲಯ, ಪೋಲೆಂಡಿನ ಆಡಮ್ ಮಿಕಿವಿಚ್ ವಿಶ್ವವಿದ್ಯಾಲಯವನ್ನು ಒಳಗೊಂಡಂತೆ ಭಾಷಾವಿಜ್ಞಾನದ ಅನೇಕ ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ಸಮ್ಮೇಳನಗಳಲ್ಲಿ ತಮ್ಮ ಸಂಶೋಧನಾ ಪ್ರಬಂಧವನ್ನು ಮಂಡಿಸಿದ್ದಾರೆ.ಸಾಹಿತ್ಯ ವಿಮರ್ಶೆ ಇವರ ಆಸಕ್ತಿಯ ಕ್ಷೇತ್ರ.'ಅರ್ಥದಾಚೆಯ ಬೆಡಗು' ಇವರ ಇತ್ತೀಚಿನ ವಿಮರ್ಶಾ ಸಂಕಲನ. ತತ್ತ್ವಾಭಿನಯ ನಿಘಂಟು, ನಾಮ ವ್ಯಾಸಂಗ ಇವರ ಸಂಪಾದಿತ ಕೃತಿಗಳು.

ಸಂಕ್ರಮಣ ಪತ್ರಿಕೆಯ ಕಥಾಸ್ಪರ್ಧೆಯಲ್ಲಿ ಶ್ರೀಮತಿ ಶಶಿಕಲಾ ಅವರ ಕಥೆಯು ೨೦೧೨ರಲ್ಲಿ ಪುರಸ್ಕಾರವನ್ನು ಪಡೆದಿದೆ.ಅನೇಕ ಸಣ್ಣ ಕತೆಗಳು, ಪ್ರಬಂಧಗಳು ಪ್ರಕಟಗೊಂಡಿವೆ. ಈ ಬಾರಿ ಬಿ.ಎಂ.ಶ್ರೀ ಪ್ರತಿಷ್ಠಾನವು ಕೊಡಮಾಡುವ ೨೦೧೭ರ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿಯು ಇವರ 'ಅರ್ಥದಾಚೆಯ ಬೆಡಗು' ಕೃತಿಗೆ ಸಂದಿದೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## 'ಅಕ್ಕರಗೊಟ್ಟಿ' ೧೯-೦೨-೨೦೧೮

ವಿಷಯ: 'ಕ್ರಿಯಾಶಕ್ತಿ' ಒಂದು ವಿವೇಚನೆ




ಚಾಲನೆ ನೀಡಿದವರು : ಶ್ರೀ ವಿ.ಸಿ. ಗುರುಶಾಂತಪ್ಪಕರ್ನಾಟಕ ಇತಿಹಾಸ ಅಕಾದೆಮಿ ಸದಸ್ಯರಾದ ಶ್ರೀ ಗುರುಶಾಂತಪ್ಪ ಅವರ ಪರಿಚಯವನ್ನು ಮಾಡಿದ ಡಾ॥ ಪಿ.ವಿ.ನಾರಾಯಣ ಅವರು ಭಾಗವಹಿಸಿದ್ದ ಸರ್ವರಿಗೂ ಸ್ವಾಗತಕೋರಿದರು.

ಶ್ರೀ ಗುರುಶಾಂತಪ್ಪ ಅವರು "ಕ್ರಿಯಾಶಕ್ತಿ" ಎಂಬ ಪದವು ಏನನ್ನು ಸೂಚಿಸಬಹುದು, ಅದು ವ್ಯಕ್ತಿ ವಾಚಕ ಪದವೇ ಅಗಿದ್ದಲ್ಲಿ ಯಾರಿಗೆ ಅನ್ವಯವಾಗುವುದು.ಸಂದರ್ಭ, ಮತ್ತು ಈ ಪದವು ಕೆಲವು ಶಾಸನಗಳಲ್ಲೂ ಕಂಡು ಬರುವುದೆಂದು ತಿಳಿಸಿದರು. ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಮತ್ತು ಕರ್ನಾಟಕ ಇತಿಹಾಸಕಾರರು ಬಿಂಬಿಸುವಂತೆ ವಿಜಯನಗರ ಸಾಮ್ರಾಜ್ಯ ಸ್ಥಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯರಿಗೇ ಈ "ಬಿರುದು" ಅನ್ವಯವಾಗುವುದೆಂಬ ಅಭಿಪ್ರಾಯವಿರುವುದಾಗಿ, "ಕ್ರಿಯಾಶಕ್ತಿ" ಪದದ ಬಳಕೆಯ ಸಾಧ್ಯತೆಯನ್ನು ತಿಳಿಸಿದರು. ಡಾ॥ ರಘುನಾಥಭಟ್ಟರ ಲೇಖನ, ಕೆಲವು ಶಾಸನಗಳಲ್ಲಿನ ಉಲ್ಲೇಖ ಮತ್ತು ಸಾಹಿತ್ಯದಲ್ಲಿನ ಕೆಲವು ಉಲ್ಲೇಖಗಳನ್ನು ಸಭೆಯ ಗಮನಕ್ಕೆ ತಂದರು. ಕ್ರಿಯಾಶಕ್ತಿ ಪದವು ವಿದ್ಯಾರಣ್ಯರನ್ನೇ ಕುರಿತಾಗಿ ಹೇಳಿದೆ ಎಂಬುದಕ್ಕೆ ಬಲವಾದ ಆಧಾರಗಳ ಕೊರತೆ, ವಿಜಯನಗರದ ಪೂರ್ವಕಾಲದಲ್ಲಿ ಕಾಳಾಮುಖ ಯತಿಗಳನ್ನು ಕ್ರಿಯಾಶಕ್ತಿ ಎಂದು ಸಂಬೋಧಿಸುತ್ತಿದ್ದ ಉದಾಹರಣೆಗಳನ್ನು ನೀಡಿದರು.ಈ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು.

ಚರ್ಚೆಯಲ್ಲಿ ಪ್ರೊ॥ ದೇವರಾಜಸ್ವಾಮಿ, ಶ್ರೀ ಸುಬ್ರಹ್ಮಣ್ಯ, ಡಾ.ವಿ.ಸಂಧ್ಯಾ, ಡಾ.ನಳಿನಿ ವೆಂಕಟೇಶ್, ಶ್ರೀ ವೆಂಕಟರಮಣಯ್ಯ, ಮುಂತಾದ ವಿದ್ವಾಂಸರು ಭಾಗವಹಿಸಿದರು.

ಒಟ್ಟಾರೆ ಈ ಕ್ರಿಯಾಶಕ್ತಿ ಪದದ ಪ್ರಯೋಗದ ಬಗ್ಗೆ ಸಾಹಿತ್ಯ ಹಾಗೂ ಶಾಸನಗಳಲ್ಲಿ ಚಾರಿತ್ರಿಕ ದಾಖಲೆಗಳಲ್ಲಿ ಮುಂದೆ ಹೆಚ್ಚಿನ ಆಕರಗಳು ದೊರೆತಾಗ, ಒಂದು ಖಚಿತ ತೀರ್ಮಾನಕ್ಕೆ ಬರಲು ಸಾಧ್ಯವಾಗುವುದೆಂಬ ಅಭಿಪ್ರಾಯ ವ್ಯಕ್ತವಾಯಿತು.

ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಸಲ್ಲಿಸಿದರು.

## ೨೮-೨-೨೦೧೮ ಡಾ. ಎಂ.ಎ. ಜಯಚಂದ್ರ ದತ್ತಿ ಉಪನ್ಯಾಸ.

ವಿಷಯ : ಹತ್ತನೇ ಶತಮಾನದ ಜೈನ ಕಾವ್ಯಗಳಲ್ಲಿ ಪ್ರಭುತ್ವದ ನೆಲೆಗಳು

ಉಪನ್ಯಾಸ : ಡಾ॥ ಎಲ್.ಜಿ. ಮೀರಾ, ಕನ್ನಡ ಪ್ರಾಧ್ಯಾಪಕರು, ಖ್ಯಾತ ವಿಮರ್ಶಕರು

ಸ್ತ್ರೀ ಸಂವೇದನೆಯಲ್ಲಿ "ಕನ್ನಡ ಕಥನ" ಮಹಾಪ್ರಬಂಧಕ್ಕೆ ಪಿಎಚ್.ಡಿ ಪದವಿಯನ್ನು ಪಡೆದು, ಸಣ್ಣಕಥೆಗಳು, ಅನುವಾದಿತ ಕೃತಿಗಳು ಮತ್ತು ನಾಟಕಗಳನ್ನು ರಚಿಸಿ ಹಲವಾರು ಪ್ರಶಸ್ತಿಗಳನ್ನು ಪಡೆದ ಡಾ॥ ಎಲ್.ಜಿ. ಮೀರಾ ಅವರು ವಿಮರ್ಶಾಕಾರರಾಗಿಯೂ ಕನ್ನಡ ಸಾಹಿತ್ಯ ಲೋಕದಲ್ಲಿ ಸೇವೆಸಲ್ಲಿಸುತ್ತಿದ್ದಾರೆ, ಉಪನ್ಯಾಸಕರನ್ನು ಡಾ॥ ಪಿ.ವಿ.ನಾರಾಯಣ, ಅವರು ಸಭೆಗೆ ಪರಿಚಯಿಸಿದರು.

ಕನ್ನಡ ನಾಡಿಗೆ ಜೈನಧರ್ಮವು, ಮೌರ್ಯಸಾಮ್ರಾಟ್ ಚಂದ್ರಗುಪ್ತನಿಂದ ಮತ್ತು ಅವನ ಜೊತೆಗೆ ಶ್ರುತ ಕೇವಲಿಯಾದ ಭದ್ರಬಾಹು ಜೈನಮುನಿಗಳು ಆಗಮಿಸಿ. ನೆಲೆಗೊಳಿಸಿದ್ದರಿಂದ ಪ್ರಾರಂಭವಾಯಿತೆಂದು ಜೈನಧರ್ಮ ಉತ್ತರ ಭಾರತದಿಂದ ಬೇರೂರಿ ನೆಲೆಸಿದ ವಿಚಾರಗಳನ್ನು ಪ್ರಾಸ್ತಾವಿಕವಾಗಿ ಹೇಳಿ, ನಂತರ ಗಂಗರ ರಾಜವಂಶ ಜೈನ ಧರ್ಮಕ್ಕೆ ನೀಡಿದ ಆಶ್ರಯ, ಪ್ರೋತ್ಸಾಹ, ಗಂಗರಾಜ್ಯ ಸ್ಥಾಪನೆಗೆ ಜೈನ ಮುನಿ




ಸಿಂಹನಂದಿಯ ಪಾತ್ರ, ಕಾಂಚಿಯಲ್ಲಿ ಸಮಂತ ಭದ್ರ ಮುನಿಯ ಪಾತ್ರ ಮತ್ತು ಹಲವಾರು ಇತರ ಮುನಿಗಳ ಪಾತ್ರಗಳಲ್ಲಿ ಪ್ರಭುತ್ವದ ನೆಲೆಯನ್ನು ಕಾಣಬಹುದೆಂದು ಸೋದಾಹರಣವಾಗಿ ವಿವರಿಸಿದರು. ನಂತರ ಹಳಗನ್ನಡ ಕ್ರಿ.ಶ. ೭೫೦-೧೧೫೦ರವರೆಗೆ (ಜೈನಸಾಹಿತ್ಯದ ಕಾಲ) ಕವಿರಾಜಮಾರ್ಗ ಕಾಲದಿಂದ ಆರಂಭಗೊಂಡು, ಹತ್ತನೆಯ ಶತಮಾನದ ಅರಿಕೇಸರಿಯ ಆಸ್ಥಾನದಲ್ಲಿದ್ದ ಶ್ರೇಷ್ಠಕವಿ ಪಂಪ, ಅವನ ಗುರು ದೇವೇಂದ್ರಮುನಿ, ಅವರ ಕೊಡುಗೆಗಳು, ಜೈನ ಧರ್ಮಕ್ಕೆ ಸಂಬಂಧಿಸಿದ ಕೃತಿಗಳ ರಚನೆಗೆ ರಾಜಾಶ್ರಯ ದೊರಕಿದುದನ್ನು ಗ್ರಂಥಗಳ ಪರಿಚಯದೊಂದಿಗೆ ವಿವರಿಸಿದರು. ಜೈನ ಧರ್ಮಕ್ಕೆ ಸಂಬಂಧಿಸಿದ ಹಾಗೆ ಹಲವಾರು ರಾಜರುಗಳಿಗೆ ಜೈನ ಧರ್ಮದಲ್ಲಿದ್ದ ನಿಷ್ಠೆಯನ್ನು ಕೆಲವು ಶಾಸನಗಳಲ್ಲಿ ಉಲ್ಲೇಖಿಸಿರುವ ವಿಷಯವನ್ನೂ ತಿಳಿಸಿದರು. ಸರ್ವಧರ್ಮ ಸಮನ್ವಯವನ್ನೂ, ಧಾರ್ಮಿಕ ದರ್ಶನವನ್ನೂ ಸಾರಿದ ರಾಜವಂಶಗಳನ್ನು ಹೆಸರಿಸಿದರು.

ಡಾ॥ ವಿಜಯಾಸುಬ್ಬರಾಜ್ ವಂದನಾರ್ಪಣೆ ಮಾಡಿದರು.

## ೯-೦೩-೨೦೧೮ ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ-ಸಂಗೀತ

ಗಾಯನ : ಶ್ರೀಮತಿ ಇಂದುಮತಿ ಆರ್.ಕುಮಾರ್.

ದಿನಾಂಕ: ೯-೦೩-೨೦೧೮ರಂದು ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಸಂಗೀತಕಾರ್ಯಕ್ರಮದ ಅಡಿಯಲ್ಲಿ ಶ್ರೀಮತಿ ಇಂದುಮತಿ ಆರ್. ಕುಮಾರ್ ಮತ್ತು ಸಂಗಡಿಗರು ನಡೆಸಿಕೊಟ್ಟ ಸಂಗೀತ ಕಾರ್ಯಕ್ರಮ ಅದ್ಭುತವಾಗಿದ್ದು, ಭಾವಗೀತೆ, ದಾಸರಪದ, ಶಾಸ್ತ್ರೀಯ ಸಂಗೀತ ಕೃತಿಗಳ ವೈವಿಧ್ಯಮಯ ಗಾಯನ ಸುಶ್ರಾವ್ಯವೂ, ಸುಮಧುರವೂ ಆಗಿದ್ದು

ಶ್ರೋತೃಗಳ ಮನಸ್ಸನ್ನು ಸೆರೆಹಿಡಿಯಿತು ಸಭಾಂಗಣ ತುಂಬಿ ತುಳುಕಿತ್ತು. ಒಂದು ಗಂಟೆಗೂ ಹೆಚ್ಚು ಸಂಗೀತ ರಸಧಾರೆ ಅವ್ಯಾಹತವಾಗಿ ಹರಿದು, ಕೇಳುಗರನ್ನು ಮಂತ್ರಮುಗ್ಧತೆಯೊಂದಿಗೆ ಸೆರೆಹಿಡಿದು ನಿಲ್ಲಿಸಿತು.

ಡಾ. ವಿಜಯಾಸುಬ್ಬರಾಜ್ ಅವರು ಇಂದುಮತಿ ಆರ್.ಕುಮಾರ್ ತಂಡದವರ ಪರಿಚಯ ಮಾಡಿಕೊಟ್ಟು ಸ್ವಾಗತವನ್ನು ಕೋರಿದರು.

ಡಾ. ಎಸ್. ಅನಿಲ್ ಕುಮಾರ್ ಅವರು ವಂದನಾರ್ಪಣೆ ಮಾಡಿದರು.

## ೧೧-೦೩-೨೦೧೮ ಮೈಸೂರಿನ 'ಪರಂಪರೆ' ಸಂಸ್ಥೆಯ ಸಹಯೋಗ

ಗಮಕ ವಾಚನ : ವಿದುಷಿ ಶ್ರೀಮತಿ ಸತ್ಯಲಕ್ಷ್ಮಿ

ವ್ಯಾಖ್ಯಾನ : ಡಾ. ಜ್ಯೋತಿ ಶಂಕರ್

ಪ್ರಸಂಗ: ಆದಿಪುರಾಣದ ವಜ್ರಜಂಘಭವ ವೃತ್ತಾಂತ




ಭಾರತೀಯ ಆರ್ಷೇಯ ಮೌಲ್ಯಗಳನ್ನು ಯುವಪೀಳಿಗೆ ಪರಿಚಯ ಪ್ರಸಾರ ಮತ್ತು ಪ್ರಚಾರ ಪಡಿಸುವ ಸಲುವಾಗಿ ಮೈಸೂರಿನ "ಪರಂಪರೆ" ಸಂಸ್ಥೆಯು ಕಳೆದ ಹದಿನೈದು ವರ್ಷಗಳಿಂದಲೂ ಸಾಂಸ್ಕೃತಿಕ ರಾಜಧಾನಿ ಮೈಸೂರಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ, ಆಯೋಜಿಸುತ್ತಾ ಬರುತ್ತಿದೆ. ಇತ್ತೀಚೆಗೆ, ಅಂದರೆ ನವೆಂಬರ್, ಡಿಸೆಂಬರ್ ೨೦೧೭ ಮೈಸೂರಿನಲ್ಲಿ ಆದಿಪುರಾಣದ "ವಾಚನ ಮತ್ತು ವ್ಯಾಖ್ಯಾನ ಮತ್ತು ಪ್ರದರ್ಶನ" ವನ್ನು ಬಹಳ ಶ್ರದ್ಧೆವಹಿಸಿ, ಮಾನವ ಸಂಪನ್ಮೂಲಗಳನ್ನು ಹೊಂದಿಸಿ, ಬಹಳ ಯಶಸ್ವಿಯಾಗಿ ನೆರವೇರಿಸಿತು.

ಪರಂಪರೆ ಸಂಸ್ಥೆಯ ಕಾರ್ಯದರ್ಶಿಗಳಾದ ಪ್ರೊ॥ ಕೃಷ್ಣಕುಮಾರ್ ಮತ್ತು ಇತರ ಗಮಕ ಕಲಾವಿದರ ಅಭಿಲಾಷೆಯಂತೆ ನಮ್ಮ ಪ್ರತಿಷ್ಠಾನದಲ್ಲೂ ಒಂದು ಗಮಕವಾಚನ ಕಾರ್ಯಕ್ರಮವನ್ನು ನಡೆಸಲು ಅವಕಾಶ ಕಲ್ಪಿಸಬೇಕೆಂಬ ಅದರ ಹೆಬ್ಬಯಕೆಯು ಕೈಗೂಡಿ, ಆದಿಪುರಾಣದ ಬಹಳ ಕುತೂಹಲಭರಿತ "ವಜ್ರಜಂಘಭವ" ವೃತ್ತಾಂತದ ವಾಚನವನ್ನು ಶ್ರೀಮತಿ ಸತ್ಯಲಕ್ಷ್ಮಿ ಮತ್ತು ಡಾ॥ ಜ್ಯೋತಿ ಶಂಕರ್ ಅವರು ವ್ಯಾಖ್ಯಾನವನ್ನು ನೆರವೇರಿಸಿಕೊಟ್ಟರು. ಗಮಕ ಕಲಾ ಪರಿಷತ್ತಿನ ಅಧ್ಯಕ್ಷರಾದ ಶ್ರೀಮತಿ ಗಂಗಮ್ಮ ಕೇಶವಮೂರ್ತಿ, ನಾಡಿನ ಖ್ಯಾತ ವ್ಯಾಖ್ಯಾನಕಾರರಾದ ಡಾ॥ ಎ.ವಿ. ಪ್ರಸನ್ನ ಮತ್ತು ಇತರ ಗಮಕ ಕಲಾವಿದರು ಮತ್ತು ಗಮಕಾಸಕ್ತರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಪ್ರಾರಂಭದಲ್ಲಿ ಡಾ॥ ಪಿ.ವಿ.ನಾರಾಯಣ ಅವರು, ಕಲಾವಿದರಿಗೂ, ಪರಂಪರೆ ಸಂಸ್ಥೆಯ ಆಡಳಿತ ವರ್ಗದವರಿಗೂ ಸ್ವಾಗತಕೋರಿದರು.ಶ್ರೀ ಕೃ.ರಾಮಚಂದ್ರ, ಅಧ್ಯಕ್ಷರು, ಪರಂಪರೆ ಸಂಸ್ಥೆಯ ಧ್ಯೇಯೋದ್ದೇಶಗಳನ್ನೂ ಸಂಕ್ಷಿಪ್ತವಾಗಿ ತಿಳಿಸಿದರು.ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡೋಜ ಪ್ರೊ.ಎಂ.ಎಚ್. ಕೃಷ್ಣಯ್ಯನವರು ಕಲಾವಿದರನ್ನು ಸನ್ಮಾನಿಸಿ, ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು.

ಡಾ. ವಿಜಯಾ ಸುಬ್ಬರಾಜ್ ಅವರು ವಂದನಾರ್ಪಣೆಯನ್ನು ಮಾಡಿದರು.

## ೧೭-೦೩-೨೦೧೮ ಶಂಬಾಜೋಷಿ, ಉಪ್ಪಂಗಳ ರಾಮಭಟ್ಟ ದತ್ತಿ ಕಾರ್ಯಕ್ರಮ

ಸುಭಾಷ್ ಚಂದ್ರಬೋಸ್ ಕುರಿತ ಸಾಕ್ಷ್ಯಚಿತ್ರ ಪ್ರದರ್ಶನ ಮತ್ತು ಭಾಷಣ



ಭಾಷಣಕಾರರು : ಶ್ರೀಮತಿ ಚೂಡಿ ಶಿವರಾಂ

(ಖ್ಯಾತ ಪತ್ರಕರ್ತರು, ಲೇಖಕರು)

ಶಂಬಾಜೋಶಿ, ಉಪ್ಪಂಗಳ 'ರಾಮಭಟ್ಟ ದತ್ತಿ ಕಾರ್ಯಕ್ರಮದ ಅಡಿಯಲ್ಲಿ ಸ್ವಾತಂತ್ರ್ಯ ಸೇನಾನಿ, ಅನನ್ಯ ದೇಶಪ್ರೇಮಿ ಸುಭಾಷ್ ಚಂದ್ರಬೋಸ್ ಅವರು ಮಲೇಷಿಯಾದಲ್ಲಿ ಹುಟ್ಟುಹಾಕಿದ ಇಂಡಿಯನ್ ನ್ಯಾಷನಲ್ ಆರ್ಮಿಯ ಕಾರ್ಯ ವೈಖರಿ, ಮಲಯನ್ನರ ಹೃದಯಗಳಲ್ಲಿ ದೇಶ ಪ್ರೇಮದ ಕಿಚ್ಚು ಹಚ್ಚಿ, ಭಾರತದ ಸಂಗ್ರಾಮದಲ್ಲಿ ಕೈ ಜೋಡಿಸಿ, ಶೌರ್ಯ ಸಾಹಸಗಳಿಂದ, ತ್ಯಾಗ-ಬಲಿದಾನಗಳಿಗೆ ಮುಂದಾಗುವಂತೆ ಪ್ರೇರೇಪಿಸುವ ಪರಿಯನ್ನು ಬಿಂಬಿಸುವ ಮತ್ತು ಅಸಂಖ್ಯಾತ ದೇಶಪ್ರೇಮಿಗಳ ಬಲಿದಾನದ ನಂತರವೂ ಬದುಕುಳಿದ ತೊಂಬತ್ತು, ನೂರರ ವಯಸ್ಸಿನಲ್ಲಿಯೂ ತಮ್ಮ ಆ ದಿನಗಳನ್ನು ನೆನಪಿಸಿಕೊಂಡು ಅಂದಿನದೇ ಉತ್ಸಾಹ, ಕೆಚ್ಚಿನಿಂದ ಮಾತಾಡಿ ತಮ್ಮ ಅನುಭವಗಳನ್ನು ಹಂಚಿಕೊಂಡದ್ದನ್ನು ಬಿಂಬಿಸುವ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಿ ಉಪನ್ಯಾಸವನ್ನು ಶ್ರೀಮತಿ ಚೂಡಿ ಶಿವರಾಂ ಅವರು ನೀಡಿದರು. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪ್ರೇಕ್ಷಕರ ಮನದಲ್ಲಿ ಸುಭಾಷರ ಬಗೆಗಿನ ಗೌರವವು ಮತ್ತಷ್ಟು ಹೆಚ್ಚಾಯಿತು ಹಾಗೂ ಅವರ ಅಜ್ಞಾತ ಸ್ಥಿತಿಯ ಬಗ್ಗೆ ಹಲವಾರು ಕುತೂಹಲಕರವಾದ ಪ್ರಶ್ನೆಗಳು ಮೂಡಿದವು. ಅಂತಾರಾಷ್ಟ್ರೀಯ ಪತ್ರಕರ್ತರಾದ ಶ್ರೀಮತಿ ಚೂಡಿ ಶಿವರಾಂ, ತಮ್ಮ ಸಂಶೋಧಕ ಪ್ರತಿಭೆಯಿಂದ, ಶ್ರಮದಿಂದ ಸಿದ್ಧಪಡಿಸಿದ ಸಾಕ್ಷ್ಯ ಚಿತ್ರವನ್ನು ಪ್ರೇಕ್ಷಕರು ಮೆಚ್ಚಿಕೊಂಡರು ಮತ್ತು ಅನೇಕ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದುಕೊಂಡರು. ಚೂಡಿಶಿವರಾಂ ಅವರು ತಮಗೆ ಸುಭಾಷರ ಬಗ್ಗೆ ಆಸಕ್ತಿ ಉಂಟಾಗಿದ್ದರ ಬಗ್ಗೆ ಹಾಗೂ ಅದಕ್ಕಾಗಿ ನಡೆಸಿದ ಪ್ರಯತ್ನಗಳು, ಎದುರಾದ ಸಮಸ್ಯೆಗಳು ಮುಂತಾದವುಗಳನ್ನು ತಮ್ಮ ಉಪನ್ಯಾಸದ ಮೂಲಕ ಶ್ರೋತೃಗಳೊಂದಿಗೆ ಹಂಚಿಕೊಂಡರು.

ಡಾ. ವಿಜಯಾಸುಬ್ಬರಾಜ್ ಸ್ವಾಗತಕೋರಿ ಉಪನ್ಯಾಸಕರನ್ನು ಸಂಕ್ಷಿಪ್ತವಾಗಿ ಪರಿಚಯಿಸಿದರು. ಡಾ.ಪಿ.ವಿ.ನಾರಾಯಣ ಅವರು ಪ್ರಾಸ್ತವಿಕ ನುಡಿಗಳನ್ನಾಡಿದರು.

## ಬಿ.ಎಂ.ಶ್ರೀ ಪ್ರತಿಷ್ಠಾನದ ನೂತನ ಪ್ರಯೋಗ ಸಾಹಿತ್ಯಾಸಕ್ತರಿಗೆ ಉಚಿತ ಪುಸ್ತಕ ವಿತರಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ 37ವರ್ಷಗಳಿಂದ ಅವಿರತವಾಗಿ ಸೇವೆ ಸಲ್ಲಿಸುತ್ತಿದೆ. ಪ್ರತಿಷ್ಠಾನವು ಪ್ರತಿ ತಿಂಗಳು ಆರಕ್ಕೆ ಕಡಿಮೆಯಿಲ್ಲದಂತೆ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಈ ಕಾರ್ಯಕ್ರಮಗಳಲ್ಲಿ ಉತ್ತಮ ಸಂಖ್ಯೆಯಲ್ಲಿ ಭಾಗವಹಿಸುತ್ತಿರುತ್ತಾರೆ. ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯನ್ನು ಬೆಳೆಸಿಕೊಳ್ಳುವುದನ್ನು ಪ್ರೋತ್ಸಾಹಿಸಲು 7ನೇ ಜೂನ್ 2017ರಿಂದ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಎಲ್ಲ ಸಾಹಿತ್ಯಾಸಕ್ತರಿಗೆ ಕೊಡುಗೆಯಾಗಿ ಪ್ರತಿಷ್ಠಾನವು ತನ್ನ ಪ್ರಕಟಣೆಗಳ ಪ್ರತಿಗಳನ್ನು ಉಚಿತವಾಗಿ ನೀಡುವ ಪರಿಪಾಠವನ್ನು ಬೆಳೆಸಿಕೊಂಡು ಬರುತ್ತಿದೆ. ಇದುವರೆಗೂ 40 ಕಾರ್ಯಕ್ರಮಗಳಲ್ಲಿ 1,251 ಪುಸ್ತಕಗಳ ಪ್ರತಿಗಳನ್ನು ಸಾಹಿತ್ಯಾಸಕ್ತರಿಗೆ ನೀಡಲಾಗಿದೆ.ಈ ಕೊಡುಗೆ-ಯ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಪ್ರತಿಷ್ಠಾನದ ಅಭಿಮಾನಿಗಳನ್ನು ವಿನಂತಿಸುತ್ತೇವೆ.




**ದೋಣಿ:** ಸಂಸ್ಕೃತ 'ದ್ರೋಣೀ' ಶಬ್ದದ ತದ್ಭವ. ಇದು ನೀರಿನಲ್ಲಿ ತೇಲಲು ಬಳಸುವ ಮರದ ಸಾಧನ. "ದ್ರೋಣೀ ಕಾಷ್ಠಾಂಬುವಾಹಿನೀ" ಎಂದು 'ಅಮರಕೋಶವು ಹೇಳುತ್ತದೆ. ಈ ಅರ್ಥದಲ್ಲಿ ಶಾಂತಿನಾಥನ 'ಸುಕುಮಾರಚರಿತೆ'ಯಲ್ಲಿ ಈ ಶಬ್ದ ಬಳಕೆಯಾಗಿದೆ ("ತುಳುಕು ನೀರಾಡಿದಂ ದೋಣಿಯಿಂದೇಜಿದನೆಂಬಂತೆ")."ದೋಣಿಯೆಂದೆನಲ್ ನಾವೆಯಕ್ಕುಂ' ಎಂದು ಮಂಗರಾಜ ನಿಘಂಟುವಿನಲ್ಲಿ ಅರ್ಥ ಹೇಳಿದೆ.ನೀರು ತುಂಬಿಡುವ ತೊಟ್ಟಿಗೂ ದ್ರೋಣಿ ಎಂದು ಸಂಸ್ಕೃತದಲ್ಲಿ ಹೇಳುತ್ತಾರೆ.ಕನ್ನಡದಲ್ಲಿ ಈ ಅರ್ಥವೂ ಇದೆ."ಕಲ್ಲ ದೋಣಿಯಲೆಚಿದ ನೀರಂತೆ "ಎಂಬುದು ನಯಸೇನನ 'ಧರ್ಮಾಮೃತ'ದ ಮಾತು.ಆಕಾರವನ್ನು ಹೋಲುವ ಮತ್ತು ನೀರಿನೊಡನೆ ಸಂಬಂಧ ಹೊಂದಿರುವ ಕಾರಣ ಇನ್ನೂ ಹಲವಾರು ವಸ್ತುಗಳನ್ನು ಸೂಚಿಸಲು ಈ ಈ ಶಬ್ದವು ಕನ್ನಡದಲ್ಲಿ ಬಳಕೆಯಲ್ಲಿದೆ. ಮನೆಯ ಸೂರಿನ ಮೇಲೆ ಬಿದ್ದ ಮಳೆ ನೀರು ಕೆಳಗೆ ಹರಿದು ಹೋಗಲು ಬಿಟ್ಟಿರುವ ಕಂಡಿಯನ್ನೂ ದೋಣಿ ಎನ್ನುತ್ತಾರೆ.

ದೋಣಿ ಎಂಬ ಶಬ್ದವನ್ನು ತಟ್ಟೆ ಎಂಬರ್ಥದಲ್ಲಿಯೂ ಬಳಸುತ್ತಾರೆ. "ನಾಯುಣ್ಣದ ದೋಣಿಯೊಳ್ ಊಡಿದಂಗೆ ಪದಯಿದನೆ ಕರಂ" ಎಂಬುದು 'ಸುಕುಮಾರ ಚರಿತೆ'ಯ ಮಾತು.ತಟ್ಟೆಯಂತೆ ಅಗಲವಾಗಿದ್ದು ಅದಕ್ಕಿಂತ ಆಳವಾದ ಬಾನಿಯನ್ನೂ ಈ ಶಬ್ದದಿಂದಲೇ ಕರೆಯುವ ರೂಢಿಯಿತ್ತು. ತಗ್ಗು ಬೀಳು ಎಂಬರ್ಥದಲ್ಲಿ 'ದೋಣಿವೋಗು' ಎಂಬ ಪ್ರಯೋಗವಿತ್ತು. ("ಇರ್ಬಗಿಯಾಗಿ ಪೋಟ್ದು ನೀರೇಜಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿವೋಪಿನಂ" – 'ಸುಕುಮಾರಚರಿತೆ'). ದೋಣಿಯಾ–ಕಾರದ ಹರವಿಯನ್ನು 'ದೋಣಿಕೊಂಡ' ಎಂದು 'ವಡ್ಡಾರಾಧನೆ'ಯಲ್ಲಿ ಕರೆದಿದೆ ("ಒಂದು ದೋಣಿಕೊಂಡಮಂ ತಜೆಸಿ") ಇದು 'ದ್ರೋಣಿಕುಂಡ'ದ ತದ್ಭವರೂಪ.

ಡೋಣಿ ಎಂಬ ರೂಪದಲ್ಲಿಯೂ ಈ ಶಬ್ದದ ಬಳಕೆಯಿದೆ. "ಜಾಲಗಾರನ ಡೋಣಿಯಂತೆ, ಬಳಸುವ ಹುಟ್ಟಿನಂತೆ, ಬೈಚಿಟ್ಟ ನೆಲೆಯಿರ್ದಡೇನು ಭೋಗಿಸಲರಿಯನಾಗಿ. ಲಿಂಗವಂಗದ ಮೇಲಿದ್ದಡೆ ಮನ ಸಂಗವ ಮಾಡಬಲ್ಲುದೆ?"ಎಂಬುದು ಮೋಳಿಗೆ ಮಾರಯ್ಯನೆಂಬ ವಚನಕಾರನ ಮಾತು.ಈ ರೂಪವು ದೋಣಿ ಶಬ್ದಕ್ಕಿರುವ ಬಹುತೇಕ ಎಲ್ಲ ಅರ್ಥಗಳಲ್ಲಿಯೂ ಬಳಕೆಯಾಗಿದೆ.

=====

**ನಂಜು:** ಇದೊಂದು ಕನ್ನಡ ಪದ, ವಿಷ ಎಂಬುದು ಅದರ ಅರ್ಥ. ಈ ಶಬ್ದವು ಇತರ ದ್ರಾವಿಡ ಭಾಷೆಗಳಲ್ಲೂ ದೊರೆಯುತ್ತದೆ: ತಮಿಳು ಮಲಯಾಳಂಗಳಲ್ಲಿ ನಂಚು, ತುಳುವಿನಲ್ಲಿ ನಂಜು, ನಂಜಿ ಎಂಬ ರೂಪಗಳಿವೆ. ರಕ್ತದ ವಿಷಪೂರಿತವಾಗುವಿಕೆಯನ್ನು ನಂಜು ಎನ್ನುತ್ತಾರೆ. ವಿಷಯುಕ್ತ ನೀರನ್ನು ಪಂಪ 'ನಂಜುನೀರ್' ಎನ್ನುತ್ತಾನೆ. 'ನಂಜುರುಳಿ' ಎಂದರೆ ವಿಷದ ಉಂಡೆ; ಈ ಶಬ್ದ ಬಳಕೆಯಾಗಿರುವುದು ಅಗ್ಗಳನ 'ಚಂದ್ರಪ್ರಭಪುರಾಣ'ದಲ್ಲಿ; ಇದೇ ಅರ್ಥದಲ್ಲಿ 'ಧರ್ಮಾಮೃತ'ದಲ್ಲಿ 'ನಂಜಿನುರುಳಿ' ಎನ್ನಲಾಗಿದೆ. ವಿಷವನ್ನುಳ್ಳದರಿಂದ ಕುಮಾರವ್ಯಾಸ ಹಾವನ್ನೂ ನಂಜು ಎನ್ನುತ್ತಾನೆ; ಕೃಷ್ಣನನ್ನು "ನಂಜಿನಲಿ ಪವಡಿಸುವ"[ವನು] ಎಂದು ವರ್ಣಿಸುತ್ತಾನೆ. ಪುರಂದರದಾಸ ಆದಿಶೇಷನನ್ನು 'ನಂಜಿನೊಡೆಯ' (ಹಾವುಗಳ ಒಡೆ–ಯ) ಎನ್ನುತ್ತಾನೆ. ಮಾತಿನಲ್ಲಿ ತುಂಬಿರುವ ಕೆಟ್ಟ ಭಾವನೆಯನ್ನೂ ನಂಜು ಎನ್ನುತ್ತಾರೆ.

ಈ ನಾಮಪದಕ್ಕೆ ಆಗು ಎಂದು ಸೇರಿ ಮಾಡಿಕೊಳ್ಳುವ ಕ್ರಿಯಾಪದ ನಂಜಾಗು ಎಂಬುದು ವಿಷಪೂರಿತವಾಗುವುದನ್ನು ಸೂಚಿಸುತ್ತದೆ. "ಮೊಲೆವಾಲು ನಂಜಾಗಿ ಕೊಲುವೊಡೆ ಇನ್ನಾಜಿಗೆ ದೂರುವೆನಯ್ಯಾ" ಎಂಬ ಸಾಲು ಬಸವಣ್ಣನ ವಚನವೊಂದರಲ್ಲಿದೆ. ಹಾಗೆಯೇ ವಿಷ ಹಾಕುವುದನ್ನು 'ನಂಜೂಡು' ಎನ್ನುತ್ತಾರೆ; ವಿಷಜಂತು ಕಚ್ಚಿದಾಗ ಮೈಯಲ್ಲಿ 'ನಂಜೂರು'ತ್ತದೆ.

ಸಮುದ್ರಮಥನ ಕಾಲದಲ್ಲಿ ಮೊದಲು ಬಂದ ವಿಷವನ್ನು ಲೋಕಕಲ್ಯಾಣಾರ್ಥವಾಗಿ ಶಿವ ಕುಡಿಯುತ್ತಾನೆ; ಅದು ಹೊಟ್ಟೆ ಸೇರದ ಹಾಗೆ ಪಾರ್ವತಿ ಆತನ ಕತ್ತನ್ನು ಅದುಮಿ ಹಿಡಿದುದರಿಂದ ವಿಷವು ಕೊರಳಲ್ಲೇ ಉಳಿದುಬಿಡುತ್ತದೆ.ಆದ್ದರಿಂದಲೇ ಅವನಿಗೆ ವಿಷಕಂಠ ಎಂದು ಹೆಸರಾಯಿತು; ಇದರ ನೇರ ಅನುವಾದವೇ ನಂಜುಗೊರಲ ಎಂಬುದು. ಆಂಡಯ್ಯ ಶಿವನನ್ನು ಈ ಮಾತಿನಿಂದ ಸಂಬೋಧಿಸುತ್ತಾನೆ. ನಂಜುಂಡ ಎಂದರೂ ಇದೇ ಅರ್ಥ: ನಂಜು+ಉಂಡ[ವನು]. ಇದಕ್ಕೆ ಮುಂದೆ ಒಡೆ–ಯ ಎಂಬರ್ಥದ ಈಶ್ವರ ಎಂಬ ಸಂಸ್ಕೃತ ಶಬ್ದ ಸೇರಿ ನಂಜುಂಡೇಶ್ವರ ಎಂದಾಯಿತು (ಈ ರೂಪವು ಹದಿನಾಲ್ಕನೆಯ ಶತಮಾನದ ಶಾಸನದಲ್ಲಿ ದೊರೆಯುತ್ತದೆ). ಹಾಗೆಯೇ ನಂಜಾಂಬಾ ಎಂಬುದು. ಕಪಿಲಾ ನದಿಯ ದಂಡೆಯಲ್ಲಿರುವ ನಂಜನಗೂಡು ನಂಜುಂಡನ ಆವಾಸ. ಆ ಊರಿನ ಈ ದೈವವನ್ನು ಟಿಪ್ಪು 'ಹಕೀಂ ನಂಜುಂಡ' ಎಂದು ಕರೆಯುತ್ತಿದ್ದನಂತೆ.ಸಂಬಂಧಸೂಚಕ ಪದವು ಸೇರಿ ಅಂಕಿನಾಮವಾಗುವುದು ಕನ್ನಡದಲ್ಲಿ ಸಾಮಾನ್ಯ.ಈ ರೀತಿ ಆಗಿರುವ ಶಬ್ದಗಳೇ ನಂಜಯ್ಯ, ನಂಜಪ್ಪ, ನಂಜಣ್ಣ, ನಂಜಪ್ಪಣ್ಣಯ್ಯ ಮುಂತಾದುವು.

## ಪರಿಚಯ

### ಡಾ.ಎಲ್ ಸಿ ಸುಮಿತ್ರಾ



ಹುಟ್ಟಿದ್ದು ತೀರ್ಥಹಳ್ಳಿ ತಾಲ್ಲೂಕಿನ ಲಕ್ಷ್ಮೀಪುರದಲ್ಲಿ. ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ಕನ್ನಡ ಎಮ್ ಎ. ಓದಿನ ನಂತರ ""ಕುವೆಂಪು ಮತ್ತು ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ" ವಿಷಯದಲ್ಲಿ ಪಿಎಚ್ ಡಿ ಪದವಿ.ಪರಿಸರ ಚಿಂತನೆ ಮತ್ತು ವಿಮರ್ಶೆಯಲ್ಲಿ ಒಲವು.ಕಥೆಗಾರ್ತಿ, ಕವಯತ್ರಿಯಾಗಿ ಗುರುತಿಸಲ್ಪಟ್ಟಿದ್ದಾರೆ. ಇವರ ಕಥೆಗಳು ಮಲಯಾಳಮ್,ಇಂಗ್ಲಿಷ್ ಮತ್ತು ತೆಲುಗು ಭಾಷೆಗಳಿಗೆ ಅನುವಾದಗೊಂಡಿವೆ. ಕವಿತೆಗಳು ಬೆಂಗಳೂರು ಮತ್ತು ಮಂಗಳೂರು ವಿ,ವಿ ಯಲ್ಲಿ ಪದವಿ ಪಠ್ಯಪುಸ್ತಕದಲ್ಲಿ ಸೇರಿವೆ. ಬಕುಲದ ದಾರಿ ಮತ್ತು ತುಂಬೆ ಹೂ ಕವನಸಂಗ್ರಹಗಳು. ವಿಭಾವ, ನಿರುಕ್ತ, ಕಾಡುಕಡಲು, ಓದಿನ ಸುಖ, ಇವರ ವಿಮರ್ಶಾ ಕೃತಿಗಳು. ಗುಬ್ಬಿಹಳ್ಳದ ಸಾಕ್ಷಿಯಲ್ಲಿ ಕಥಾ ಸಂಕಲನ, ಹೂ ಹಸಿರಿನ ಮಾತು, ಪಶ್ಚಿಮ ಘಟ್ಟಗಳ ಹೂ ಬಿಡುವ ಸಸ್ಯಗಳ ಕುರಿತ ಬರಹ. ಅಮೃತಾಪ್ರೀತಮ್ ಅವರ "ಪಿಂಜರ್' .ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ."ಗದ್ದೆಯಂಚಿನ ದಾರಿ' ಪ್ರಬಂಧ ಸಂಕಲನ. ಧಾರವಾಡ ಕರ್ನಾಟಕ ಸಂಘದ ಮಾತೊಶ್ರಿ ರತ್ನಮ್ಮ ಹೆಗ್ಗಡೆ ಪುಸ್ತಕ ಬಹುಮಾನ, ಕರ್ನಾಟಕ ಲೇಖಕಿಯರ ಸಂಘದ ಎಚ್ ವಿ ಸಾವಿತ್ರಮ್ಮ ಪ್ರಶಸ್ತಿ, ಶಿವಮೊಗ್ಗಾ ಕರ್ನಾಟಕ ಸಂಘದ ಎಸ್ ವಿ ಪರಮೇಶ್ವರ ಭಟ್ಟ ಪ್ರಶಸ್ತಿ, ಸಾಹಿತ್ಯ ಪರಿಷತ್ತಿನ ನೀಲಗಂಗಾ ದತ್ತಿ ಬಹುಮಾನ, ಧಾರವಾಡದ ಇನ್ಫೋಸಿಸ್ ಪ್ರತಿಷ್ಠಾನದ ಪ್ರಶಸ್ತಿ, ಗುಬ್ಬಿಹಳ್ಳದ ಸಾಕ್ಷಿಯಲ್ಲಿ, ಕೃತಿಗೆ ಪಡೆದಿದ್ದಾರೆ. ತೀರ್ಥಹಳ್ಳಿಯ ತುಂಗಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಿಕೆಯಾಗಿ, ಪ್ರಿನ್ಸಿಪಾಲರಾಗಿ ನಿವೃತ್ತರಾಗಿದ್ದಾರೆ. ಬಿಎಂಶ್ರೀ ಪ್ರತಿಷ್ಠಾನವು ಕೊಡಮಾಡುವ ಡಾ. ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ೨೦೧೭ರ ಪ್ರಶಸ್ತಿಗೆ ಭಾಜನರಾಗಿದ್ದಾರೆ.

# ಮಾರ್ಚ್ ತಿಂಗಳ ವರದಿ ೨೦೧೮

೧) ಹಸ್ತಪ್ರತಿ ವಿಭಾಗ: ಹೊರಗಿನಿಂದ ಬಂದ ನಾಲ್ಕು ತಾಳೆಗರಿ ಹಸ್ತಪ್ರತಿಗಳನ್ನು ಸಂರಕ್ಷಣೆಗೊಳಪಡಿಸಿ, ಗ್ರಂಥಗಳ ವಾರುಸುದಾರರಿಗೆ ಗ್ರಂಥಗಳ ಸೂಚಿಯೊಂದಿಗೆ ಹಿಂದಿರುಗಿಸಲಾಯಿತು.

೨) ಗ್ರಂಥಾಲಯದಲ್ಲಿನ ಹೆಚ್ಚುವರಿ ಪುಸ್ತಕಗಳನ್ನು ಗುರುತಿಸಿ, ಅವುಗಳ ಪಟ್ಟಿ ತಯಾರಿಸಿ, ಅವುಗಳನ್ನು ವಿವಿಧ ಆಯಾಮಗಳಲ್ಲಿ ವಿಂಗಡಿಸಿ, ಹಲವು ವಿಶ್ವವಿದ್ಯಾಲಯಗಳಿಗೂ, ಕಾಲೇಜುಗಳಿಗೂ ಮತ್ತು ಇತರ ಸಂಘ ಸಂಸ್ಥೆಗಳಿಗೂ ವಿತರಿಸಲಾಯಿತು. ಈ ಕೆಳಕಂಡ ಸಂಸ್ಥೆಗಳಿಗೆ ಪುಸ್ತಕಗಳನ್ನು ನೀಡಲಾಯಿತು.

**ಪಟ್ಟಿ(೧)ವಿಶ್ವವಿದ್ಯಾನಿಲಯಗಳು, ಕಾಲೇಜುಗಳು.**

| ಕ್ರ.ಸಂ | | ಸಂಸ್ಥೆಯ ಹೆಸರು/ಸ್ಥಳ | ಪುಸ್ತಕಗಳ ಸಂಖ್ಯೆ |
|---|---|---|---|
| | ಭಾಷೆ, ಕನ್ನಡ, ತೆಲುಗು, ಇಂಗ್ಲಿಷ್ | ನಿಯತಕಾಲಿಕೆಗಳು | |
| | ಕ.ಲೋಚನ, ಕ.ಸಾ.ಪ, ಪರಿಷತ್ ಪತ್ರಿಕೆ, ಜೀವನ, ಸಾಧನೆ, ಕಿಎಒಖ ಮುಂತದವು | | |
| ೧ | ತುಮಕೂರು ವಿಶ್ವವಿದ್ಯಾಲಯ, ತುಮಕೂರು | ೩೮೮ | ೮೩ |
| ೨ | ಯರಗೆರಾ ಕನ್ನಡ ಸ್ನಾತಕೋತ್ತರ ಕೇಂದ್ರ, ಗುಲಬರ್ಗಾವಿಶ್ವವಿದ್ಯಾಲಯ, ರಾಯಚೂರು | ೧೪೩ | ೩೬ |
| ೩ | ದ್ರವಿಡಿಯನ್ ಯೂನಿವರ್ಸಿಟಿ, ಕುಪ್ಪಂ(ಆ.ಪ್ರ) | ೧೮೮ ತೆಲುಗು | |
| | | ೭೫ | ಕನ್ನಡ ೨೩೦ |
| ೪ | ಕನಕಪುರ ಕನ್ನಡ ಸ್ನಾತಕೋತ್ತರ ಕೇಂದ್ರ, ಕನಕಪುರ | ೧೮೦ | ೨೦ಲೋಚನ |
| | | ೯ | ಪ್ರಬುದ್ಧಕರ್ನಾಟಕ |
| ೫ | ಸ್ನಾತಕೋತ್ತರ ಕೇಂದ್ರ ವಿಜಯಾ ಕಾಲೇಜು, ಜಯನಗರ, ಬೆಂಗಳೂರು | ೨೯೩ | |
| | | ೬ ಇಂಗ್ಲಿಷ್ | ೩೩ ೩೪ಲೋಚನ |
| ೬ | ಬಿಬಿಎಂಪಿ ಕಾಲೇಜು ಕಸ್ತೂರಿಬಾ ನಗರ, ಮೈಸೂರು ರಸ್ತೆ, ಬೆಂಗಳೂರು | ೧೭೫ | – |
| ೭ | ಕನಕ ಕಾಲೇಜು, ಯಲಹಂಕ, ಬೆಂಗಳೂರು | ೧೪೩ | ೩೦ |
| ೮ | ಎಸ್.ಜೆ. ಆರ್. ಸಿ. ಕಾಲೇಜು , ಬೆಂಗಳೂರು | ೩೮ | ೨೭ |
| ೯ | ಸರ್ಕಾರಿ ಪ್ರಥಮ ದರ್ಜೆಕಾಲೇಜು, ವಿಜಯನಗರ–ಸ್ನಾತಕೋತ್ತರ ಕೇಂದ್ರ | ೭೮ | ೨೭ |
| ೧೦ | ಎಸ್.ಎಸ್.ಎಂ.ಆರ್.ವಿ. ಕಾಲೇಜು ಜಯನಗರ, | ೨೧೪ | ೩೫ |
| ೧೧ | ಲೋಯಲಾ ಕಾಲೇಜು ಕಾಳೇನ ಅಗ್ರಹಾರ, ಬನ್ನೇರುಘಟ್ಟ ರಸ್ತೆ | ೬೦ | – |
| ೧೨ | ಕೊಡ್ಲಿಪೇಟೆ ಪ್ರಥಮ ದರ್ಜೆಕಾಲೇಜು ಕೊಡಗು | ೬೨ | ೩೮ |
| ೧೩ | ಸರ್ಕಾರಿ ಪ್ರಥಮ ದರ್ಜೆಕಾಲೇಜು, ಸಿದ್ಧಾರ್ಥನಗರ, ಮೈಸೂರು | ೭೦ | ೫೭ |
| ೧೪ | ಟಿಎಸ್ಎಚ್ ಎಂಎಸ್ ಸರ್ಕಾರಿ | | |
| | ಪ್ರಥಮ ದರ್ಜೆ ಕಾಲೇಜು, ಸಿರುಗುಪ್ಪ, ಬಳ್ಳಾರಿಜಿಲ್ಲೆ | ೧೦೭ | ೩೮ |
| ೧೫ | ಶ್ರೀಗವಿಸಿದ್ದೇಶ್ವರ ಕಲಾ, ವಿಜ್ಞಾನ, ವಾಣಿಜ್ಯ ಮಹಾವಿದ್ಯಾಲಯ ಕೊಪ್ಪಳ. | ೧೫೦ | ೩೪ಲೋಚನ |
| ೧೪ | ಇತರೆ | | |
| ೧೬ | ಸರ್ಕಾರಿ ಪದವಿ ಪೂರ್ವಕಾಲೇಜು ಯಸಳೂರು ಹಾಸನ ಜಿಲ್ಲೆ | ೮೦ | ೩೫ |
| ೧೭ | ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಶನಿವಾರ ಸಂತೆ ಕೊಡಗು | ೧೧೨ | ೩೪ |
| ೧೮ | ಸಿ.ಇ.ಎಸ್. ಹೈಸ್ಕೂಲು, ಉತ್ತರಹಳ್ಳಿ | ೪೫ | |
| ೧೯ | ಅಕ್ಷಯ ಪಾತ್ರೆ ಫೌಂಡೇಷನ್ ಮುಖಾಂತರ ಪ್ರೌಢಶಾಲೆಗಳಿಗೆ ವಿತರಿಸಿದ ಪುಸ್ತಕಗಳು | ೩೫೩ | |
| | ಕಾಲೇಜುಗಳಿಗೆ, ವಿಶ್ವವಿದ್ಯಾನಿಲಯಗಳಿಗೆ ಮತ್ತು ಪ್ರೌಢಶಾಲೆಗಳಿಗೆ ನೀಡಿದ ಪುಸ್ತಕಗಳುಒಟ್ಟು | | ೨೯೬೦ ೮೧೪ |
| | ಶಿಕ್ಷಣೇತರ ಸಂಸ್ಥೆಗಳಿಗೆ (ಇತರ ಸಂಸ್ಥೆಗಳು) ಪಟ್ಟಿ (೨)ರಂತೆ | ೮೬೬ | ೯೮ |
| | ಒಟ್ಟು | ೩೮೨೬ | ೯೧೨ |

ಕಿರು ಪರಿಚಯ

**ಡಾ. ವಿಜಯಾ ಸುಬ್ಬರಾಜ್**



ವಿದ್ಯಾರ್ಹತೆ: ಬಿಎಸ್ ಸಿ, ಎಂ ಎ,, ಪಿಹೆಚ್ ಡಿ ಎಂ ಎ(ಇಂಗ್ಲೀಷ್), ಎಲ್.ಎಲ್.ಬಿ, ಫ್ರೆಂಚ್ ಭಾಷೆಯಲ್ಲಿ ಡಿಪ್ಲೋಮಾ, ಸಾಹಿತ್ಯ ರತ್ನ(ಹಿಂದಿ)

ವೃತ್ತಿ: ಪ್ರಾಧ್ಯಾಪಕರು(ನಿವೃತ್ತ), ಎಂ. ಇ. ಎಸ್, ಕಾಲೇಜು, ಭೆಂಗಳೂರು

ಪ್ರಕಟಿತ ಕೃತಿಗಳು: 12 ಕವನ ಸಂಕಲನಗಳು, 9 ಕಾದಂಬರಿಗಳು, 7 ಸಣ್ಣಕಥೆಗಳ ಸಂಕಲನಗಳು, 8 ವಿಮರ್ಶಾ ಕೃತಿಗಳು, 11 ಜೀವನ ಚರಿತ್ರೆಗಳು, 14 ನಾಟಕಗಳು, 2 ಮಕ್ಕಳ ಕಾದಂಬರಿಗಳು, 14 ರೇಡಿಯೋ ಲೇಖನಗಳು, ನೂರಾರು ಬಿಡಿ ಲೇಖನಗಳು,

ಪುರಸ್ಕಾರಗಳು: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಒಳಗೊಂಡಂತೆ 26ಕ್ಕೂ ಹೆಚ್ಚು ಪ್ರಶಸ್ತಿ ಪುರಸ್ಕಾರಗಳು,

ರೂ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯೂ ಆಗಿರುವ ಡಾ. ವಿಜಯಾ ಸುಬ್ಬರಾಜ್ ಅವರು 2014 ರಲ್ಲಿ ರೂ. ಎರಡು ಲಕ್ಷಗಳ ದತ್ತಿಯನ್ನು, ಪ್ರತಿ ವರ್ಷ ತಮ್ಮ ಹೆಸರಿನಲ್ಲಿ "ಗಣ್ಯ ಲೇಖಕಿ" ಪುರಸ್ಕಾರವನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ನೀಡಿರುವ ಲೇಖಕಿಗೆ ನೀಡಲು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ.

ಪರಿಚಯ

ಪದ್ಮರಾಜ ದಂಡಾವತಿ(೧೯೫೫) ಓದಿದ್ದು ಕನ್ನಡ ಸಾಹಿತ್ಯ, ಒದಗಿ ಬಂದುದು ಪತ್ರಿಕೋದ್ಯಮ. ಪುಟ್ಟಪುಟ್ಟ ಹೆಜ್ಜೆ ಇಡುತ್ತ ತಲುಪಿದ್ದು ಉನ್ನತ ಹುದ್ದೆ.ಪ್ರಜಾವಾಣಿಯ ಕಾರ್ಯ ನಿರ್ವಾಹಕ ಸಂಪಾದಕನಾಗಿ ಸುಮಾರು ಹತ್ತು ವರ್ಷ ದುಡಿಮೆ.ಪ್ರತಿ ಭಾನುವಾರ 'ನಾಲ್ಕನೇ ಆಯಾಮ' ಎಂಬ ಜನಪ್ರಿಯ ಅಂಕಣ ಬರೆದುದು ಎಂಟು ವರ್ಷಕ್ಕೂ ಮಿಗಿಲು ಅವಧಿಗೆ. ಎರಡೂ ಒಂದು ದಾಖಲೆ. ಅಂಕಣದ ವಿಸ್ತಾರ ಮತ್ತು ಹರಹು ದೊಡ್ಡದು. ರಾಜಕೀಯ, ಕೃಷಿ, ಶಿಕ್ಷಣ, ಮಾಧ್ಯಮ, ಸಾಹಿತ್ಯ, ನಾಟಕ, ಸಿನಿಮಾ ಹೀಗೆ ಅದರ ವಸ್ತು ಸಾಮಾಗ್ರಿ ವೈವಿಧ್ಯಮಯವಾದುದು.ಅದೆಲ್ಲ 'ನಾಲ್ಕನೇ ಆಯಾಮ'ದ ಆರು ಸಂಪುಟಗಳಲ್ಲಿ ಈಗ ದಾಖಲಿತ.ಜೊತೆಗೆ, 'ಚೌಕಟ್ಟಿನಾಚೆ', 'ಹೆಜ್ಜೆ ಮೂಡಿಸಿದ ಹಾದಿ', 'ಆರಂಭ', 'ಅವಲೋಕನ', 'ಪತ್ರಿಕಾಭಾಷೆ', 'ರಿಪೋರ್ಟಿಂಗ್ ಅವರ ಪ್ರಕಟಿತ ಪುಸ್ತಕಗಳು. ಕನ್ನಡ, ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಪ್ರಕಟವಾದ 'ಗೊಮ್ಮಟ' ಶ್ರವಣ ಬೆಳಗೊಳದ ಪ್ರಾಗಿತಿಹಾಸ ತಿಳಿಸುವ ಮಹತ್ವ ಪುಸ್ತಕ. ಅಮೆರಿಕ ಸರ್ಕಾರದ ಅಂತರ ರಾಷ್ಟ್ರೀಯ ನಾಯಕತ್ವ ಶಿಬಿರಕ್ಕೆ ಆಯ್ಕೆ.ಜಿಲ, ಜಿ ೫ ಶೃಂಗ ಸಭೆಗೆ ಪ್ರಧಾನಿ ಜೊತೆ ಪ್ರಯಾಣ.ಪೂರ್ವದಿಂದ ಪಶ್ಚಿಮದವರೆಗೆ ಹತ್ತು ಹಲವು ದೇಶಗಳ ಪ್ರವಾಸ. ರಾಜ್ಯೋತ್ಸವ, ಮಾಧ್ಯಮ ಅಕಾಡೆಮಿ, ಖಾದ್ರಿ ಶಾಮಣ್ಣ, ಚಾವುಂಡರಾಯ, ಆಳ್ವಾಸ್ ನುಡಿಸಿರಿಗಳಂಥ ಹಲವು ಪ್ರಶಸ್ತಿ ಹಾಗೂ ಗೌರವ ಡಾಕ್ಟರೇಟ್‌ಗಳ ಗರಿ.

## ಆಧುನಿಕ ವಚನಗಳು

**–ಪ್ರೊ. ಅಬ್ದುಲ್ ಬಶೀರ್**

ಕಾಯಕವೆ ಕೈಲಾಸವೆಂಬ ಮಾತೆಲ್ಲಿದೆ?
ಕಾಯಕವೆಲ್ಲ ಕಾಂಚಾಣಕ್ಕೆ ಎಂಬ ಮಾತು ತುಂಬಿದೆ !
ಕುರುಡು ಕಾಂಚಾಣ
ಕಾಂಚಾಣ ಕುರುಡು ಎಂಬ ಮಾತುಗಳಿರಲಿ
ಕಣ್ಣಿದ್ದವ ಯಾರೋ ಎಂದು ನೋಡುತ್ತಿದ್ದಾನೆ
ನಮ್ಮ 'ಅಲ್ಲಾರಖಾ'! ॥31॥


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-03-2018**


ಅಭಿನಂದನೆಗಳು

**ಡಾ. ಚಂದ್ರಶೇಖರ ಕಂಬಾರ**



ಹಿರಿಯ ಸಾಹಿತಿ ಮತ್ತು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ.ಚಂದ್ರಶೇಖರ ಕಂಬಾರ ಅವರು ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು ನಮಗೆಲ್ಲ ಸಂತಸ ತಂದಿದೆ.ಶ್ರೀಯುತರಿಗೆ ನಮ್ಮೆಲ್ಲರ ಅಭಿನಂದನೆಗಳು.

ಈ ಪ್ರತಿಷ್ಠಿತ ಸ್ಥಾನಕ್ಕೆ ಆಯ್ಕೆಯಾದ ೩ನೇ ಕನ್ನಡದ ಸಾಹಿತಿ ಎಂಬ ಗೌರವಕ್ಕೆ ಡಾ.ಚಂದ್ರಶೇಖರ ಕಂಬಾರ ಅವರುಪಾತ್ರರಾಗಿರುತ್ತಾರೆ.

ಕಂಬಾರ ಅವರು ೧೦ ವರ್ಷಕ್ಕೂ ಹೆಚ್ಚು ಕಾಲ ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯಕಾರಿ ಮಂಡಳಿಯ ಸದಸ್ಯರಾಗಿದ್ದರು.೨೦೧೩ ರಿಂದ ಅವರು ಅಕಾಡೆಮಿಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.ಜತೆಗೆ ಅವರು ರಾಷ್ಟ್ರೀಯ ನಾಟಕ ಮತ್ತು ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಈ ಮೊದಲು ವಿ.ಕೃ.ಗೋಕಾಕ್ ಅವರು ೧೯೮೩ ರಲ್ಲಿ ಮತ್ತು ಯು.ಆರ್.ಅನಂತಮೂರ್ತಿ ಅವರು ೧೯೯೩ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................................................

..........................................................................................

..........................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭